# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 10

ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ್ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವವರು : ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

ಉತ್ತರಿಸುವ ದಿನಾಂಕ : 14.09.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ದೇಶಿ ಕಲೆಯನ್ನು ಉತ್ತೇಜಿಸುವುದರ ಜೊತೆಗೆ ಉದ್ಯೋಗ ಸೃಷ್ಟಿಯ ನಿಟ್ಟಿನಲ್ಲಿ ರಾಷ್ಟ್ರೀಯ ಮಾರುಕಟ್ಟೆಯಲ್ಲಿ ರಾಜ್ಯದ ಆಟಿಕೆ ಸಾಮಾಗ್ರಿಗಳಿಗೆ ಮೆರುಗು ನೀಡುವ ಕ್ಲಸ್ಟರ್ ಘಟಕ ಯೋಜನೆ ಯಾವ ಹಂತದಲ್ಲಿದೆ; | ಕೊಪ್ಪಳ ಜಿಲ್ಲೆಯ "ಕಿನ್ನಾಳ ಗೊಂಬೆಗಳು" ದೇಶದಲ್ಲಿ ಪ್ರಸಿದ್ಧವಾಗಿದ್ದು ಈ ಭಾಗದಲ್ಲಿರುವ ಗೊಂಬೆ ತಯಾರಿಕಾ ನೈಪುಣ್ಯತೆಯನ್ನು ಬಳಸಿಕೊಂಡು ಕೊಪ್ಪಳ ಜಿಲ್ಲೆಯಲ್ಲಿ ಚೀನಾ ದೇಶದ ಮಾದರಿಯಲ್ಲಿ ಸಮೂಹಿಕ ಗೊಂಬೆ ತಯಾರಿಕಾ ಸಾಮರ್ಥ್ಯವುಳ್ಳ ಕೈಗಾರಿಕೆಗಳನ್ನು ಆಕರ್ಷಿಸಲು ಗೊಂಬೆ ತಯಾರಿಕಾ ಕ್ಲಸ್ಟರ್‌ನ್ನು "ಕಾಂಪೀಟ್ ವಿತ್ ಚೈನಾ" ಯೋಜನೆಯಡಿ ಸ್ಥಾಪಿಸಲಾಗುತ್ತಿದೆ.<br><br>ಈ ನಿಟ್ಟಿನಲ್ಲಿ ಗೊಂಬೆ ತಯಾರಿಕೆಯಲ್ಲಿ ಮುಂಚೂಣಿಯಲ್ಲಿರುವ ಕೈಗಾರಿಕೋದ್ಯಮಿಗಳನ್ನೊಳಗೊಂಡ "ವಿಶನ್ ಗ್ರೂಪ್" ಸ್ಥಾಪಿಸಲಾಗಿದ್ದು ಈ ವಿಶನ್ ಗ್ರೂಪ್‌ನ ಮಾರ್ಗದರ್ಶನದಂತೆ ಸದರಿ ಗೊಂಬೆ ತಯಾರಿಕಾ ಕ್ಲಸ್ಟರ್‌ನ್ನು ಅಭಿವೃದ್ಧಿಪಡಿಸಲಾಗುತ್ತಿದೆ. ಈ ಕ್ಲಸ್ಟರ್‌ನಲ್ಲಿ ಗೊಂಬೆ ತಯಾರಿಕೆಗೆ ಅವಶ್ಯವಿರುವ ಮೂಲ ಸೌಕರ್ಯಗಳಾದ ಸುಸಜ್ಜಿತ ಶಡ್ಡುಗಳು, ಡಿಸೈನ್ ಸೆಂಟರ್, ಸರ್ಟಿಫಿಕೇಶನ್ ಸೆಂಟರ್, ತರಬೇತಿ ಕೇಂದ್ರ, ನೌಕರರಿಗೆ ವಸತಿ ವ್ಯವಸ್ಥೆ ಮತ್ತು ಇತರೆ ಎಲ್ಲ ಸೌಲಭ್ಯಗಳನ್ನು ಕಲ್ಪಿಸಲಾಗುವುದು. ಸದರಿ ಕ್ಲಸ್ಟರ್‌ನಲ್ಲಿ ಬಂಡವಾಳ ಹೂಡುವ ಕೈಗಾರಿಕೆಗಳಿಗೆ ವಿಶೇಷ ಪ್ರೋತ್ಸಾಹನ ಪ್ಯಾಕೇಜ್‌ನ್ನು ಘೋಷಿಸಲಾಗಿದೆ.<br><br>ಹಾಲಿ ಮೆ: ಏಕಸ್ ಎಸ್.ಇ.ಜೆಡ್ ಲಿಮಿಟೆಡ್ ಕಂಪನಿಯವರು ಕೊಪ್ಪಳದಲ್ಲಿ 400 ಎಕರೆ ಪ್ರದೇಶದಲ್ಲಿ ಗೊಂಬೆ ತಯಾರಿಕಾ ವಿಶೇಷ ಆರ್ಥಿಕ ವಲಯ ಮತ್ತು ದೇಶಿಯ ಉತ್ಪಾದನಾ ವಲಯ ಪ್ರದೇಶಗಳನ್ನು ಅಭಿವೃದ್ಧಿಪಡಿಸುತ್ತಿದ್ದು ಇದರಲ್ಲಿ ಮೆ: ಏಕಸ್ ಸಂಸ್ಥೆಯು ರೂ.1,500 ಕೋಟಿ ಬಂಡವಾಳ ಹೂಡಲಿದ್ದು ಮುಂದಿನ 3 ರಿಂದ 5 ವರ್ಷಗಳಲ್ಲಿ 20,000 ಜನರಿಗೆ ಉದ್ಯೋಗ ಕಲ್ಪಿಸಲಿದೆ. ಈ ಘಟಕದ ಕಟ್ಟಡ ಕಾರ್ಯವು ಪ್ರಾರಂಭಗೊಂಡಿದ್ದು ಮುಂದಿನ ವರ್ಷದಲ್ಲಿ ಕಾರ್ಯಾರಂಭ ಮಾಡಲಿದೆ.<br><br>ಇದಲ್ಲದೆ ಇನ್ನೂ 7 ರಿಂದ 10 ಕಂಪನಿಗಳು ಕೊಪ್ಪಳದಲ್ಲಿ ಗೊಂಬೆ ತಯಾರಿಕಾ ಘಟಕಗಳನ್ನು ಸ್ಥಾಪಿಸಲು ಆಸಕ್ತವಾಗಿರುತ್ತವೆ. ಸಣ್ಣ ಮತ್ತು ಅತೀ ಸಣ್ಣ ಗೊಂಬೆ ತಯಾರಿಕಾ ಘಟಕಗಳಿಗೆ ಅನುಕೂಲವಾಗುವಂತೆ ಕರ್ನಾಟಕ ಸಣ್ಣ ಕೈಗಾರಿಕಾ ಅಭಿವೃದ್ಧಿ ನಿಗಮದ ವತಿಯಿಂದ ಕೊಪ್ಪಳದಲ್ಲಿ 104 ಎಕರೆ ಪ್ರದೇಶದಲ್ಲಿ ಸಣ್ಣ ಮತ್ತು ಮಧ್ಯಮ ವಿಸ್ತೀರ್ಣದ ಪ್ಲಾಟ್‌ಗಳನ್ನು ಅಭಿವೃದ್ಧಿಪಡಿಸಲಾಗಿದೆ. |

| | | |
|---|---|---|
| ಆ | ರಾಜ್ಯದಲ್ಲಿ ಕ್ಲಸ್ಟರ್ ಘಟಕಗಳಿಗೆ ಆಯ್ಕೆಯಾಗಿರುವ ಸ್ಥಳಗಳು ಯಾವುವು; (ಮಾಹಿತಿ ಒದಗಿಸುವುದು) | "ಕಾಂಪೀಟ್ ವಿತ್ ಚೈನಾ" ಯೋಜನೆಯಡಿ ನಿರ್ದಿಷ್ಟ ಉತ್ಪನ್ನಗಳ ತಯಾರಿಕೆಯ ಪರಿಸರವನ್ನು ಜಿಲ್ಲಾವಾರು ಅಭಿವೃದ್ಧಿ ಪಡಿಸುವ ನಿಟ್ಟಿನಲ್ಲಿ ಹಾಲಿ ಇಲಾಖೆಯಿಂದ ಈ ಕೆಳಕಂಡ ಜಿಲ್ಲೆಗಳಲ್ಲಿ ನಿರ್ದಿಷ್ಟ ಉತ್ಪನ್ನಗಳ ತಯಾರಿಕಾ ಕ್ಲಸ್ಟರ್‌ಗಳನ್ನು ಅಭಿವೃದ್ಧಿಪಡಿಸಲಾಗುತ್ತಿದೆ.<br>1. ಕೊಪ್ಪಳ – ಗೊಂಬೆ ತಯಾರಿಕಾ ಕ್ಲಸ್ಟರ್<br>2. ಬಳ್ಳಾರಿ – ಜವಳಿ ಕ್ಲಸ್ಟರ್<br>3. ಬೀದರ್ – ಕೃಷಿ ಯಂತ್ರೋಪಕರಣಗಳ ತಯಾರಿಕಾ ಕ್ಲಸ್ಟರ್<br>4. ಧಾರವಾಡ – ಗ್ರಾಹಕ ವಸ್ತುಗಳ ಉತ್ಪಾದನಾ ಕ್ಲಸ್ಟರ್<br>5. ಶಿವಮೊಗ್ಗ – ಜೈವಿಕ ಔಷಧಿ ಉತ್ಪಾದನೆ ಮತ್ತು ವೆಲ್‌ನೆಸ್ ಕೇಂದ್ರಗಳ ಕ್ಲಸ್ಟರ್ |
| ಇ | ಕ್ಲಸ್ಟರ್ ಘಟಕಗಳ ಸ್ಥಾಪನೆಯಿಂದಾಗಿ ಎಷ್ಟು ಉದ್ಯೋಗ ಸೃಷ್ಟಿಯಾಗಲಿದೆ; | ಮೇಲ್ಕಂಡ ನಿರ್ದಿಷ್ಟ ಉತ್ಪನ್ನಗಳ ತಯಾರಿಕಾ ಕ್ಲಸ್ಟರ್‌ಗಳ ಸ್ಥಾಪನೆಯಿಂದ ಜಿಲ್ಲಾವಾರು ಅಂದಾಜು 50,000 ಉದ್ಯೋಗಗಳ ಸೃಜನೆಯಾಗುವ ನಿರೀಕ್ಷೆಯಿದೆ. |
| ಈ | ಪಿ.ಪಿ.ಪಿ ಮಾದರಿಯ ಈ ಯೋಜನೆಗೆ ರಾಜ್ಯ ಮತ್ತು ಖಾಸಗಿಯವರ ಪಾಲು ಹಾಗೂ ಬಾಧ್ಯತೆಗಳೇನು? (ಮಾಹಿತಿ ನೀಡುವುದು) | ಸದರಿ ಯೋಜನೆಯಡಿ ರಾಜ್ಯ ಸರ್ಕಾರವು ನಿಗದಿತ ಕ್ಲಸ್ಟರ್ ಜಿಲ್ಲೆಗಳಲ್ಲಿ ಬಂಡವಾಳ ಹೂಡಿಕೆಗೆ ಪ್ರಶಸ್ತವಾದ ವಾತಾವರಣವನ್ನು ಕಲ್ಪಿಸಲಿದ್ದು ಕ್ಲಸ್ಟರ್‌ಗಳಲ್ಲಿ ಬಂಡವಾಳ ಹೂಡುವ ಘಟಕಗಳಿಗೆ ಕ್ಲಸ್ಟರ್‌ವಾರು ವಿಶೇಷ ಪ್ರೋತ್ಸಾಹನ ಪ್ಯಾಕೇಜನ್ನು ನೀಡಲಿದೆ. ಈ ನಿಟ್ಟಿನಲ್ಲಿ ಕೊಪ್ಪಳ – ಗೊಂಬೆ ತಯಾರಿಕಾ ಕ್ಲಸ್ಟರ್ ಮತ್ತು ಬಳ್ಳಾರಿ – ಜವಳಿ ಕ್ಲಸ್ಟರ್‌ಗಳಲ್ಲಿ ಬಂಡವಾಳ ಹೂಡುವ ಘಟಕಗಳಿಗೆ ಸರ್ಕಾರದ ಆದೇಶ ದಿನಾಂಕ 5.3.2019ರಲ್ಲಿ ವಿಶೇಷ ಪ್ರೋತ್ಸಾಹನ ಪ್ಯಾಕೇಜನ್ನು ಘೋಷಿಸಲಾಗಿದೆ.<br><br>ಈ ಕ್ಲಸ್ಟರ್‌ಗಳಲ್ಲಿ ಖಾಸಗಿಯವರು ಬಂಡವಾಳ ಹೂಡಿ ಘಟಕಗಳನ್ನು ಸ್ಥಾಪಿಸಲಿದ್ದು ರಾಜ್ಯ ಸರ್ಕಾರವು ಸಂಬಂಧಪಟ್ಟ ಕ್ಲಸ್ಟರ್ ಜಿಲ್ಲೆಗಳ ವಿಶೇಷ ಪ್ರೋತ್ಸಾಹನ ಪ್ಯಾಕೇಜ್‌ನಡಿ ಅರ್ಹವಿರುವ ಸಹಾಯಧನವನ್ನು ಮಾತ್ರ ನೀಡಲಿದೆ.<br><br>ಅಲ್ಲದೆ, ಈ ಕ್ಲಸ್ಟರ್‌ಗಳನ್ನು ಪಿ.ಪಿ.ಪಿ ಮಾದರಿಯಲ್ಲಿ ಅಭಿವೃದ್ಧಿಪಡಿಸುತ್ತಿರುವುದಿಲ್ಲ. |

ಸಿಐ 266 ಎಸ್‌ಪಿಐ 2021

(ಮುರುಗೇಶ ಆರ್. ನಿರಾಣಿ)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು